# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1008 |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ. ರಾಥೋಡ್<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 22.12.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2017-18 ರಿಂದೀಚೆಗೆ ಹೊಸದಾಗಿ ಸೃಜಿಸಲಾಗಿರುವ ತಾಲ್ಲೂಕುಗಳೆಷ್ಟು; ಅವು ಯಾವುವು; | ರಾಜ್ಯದಲ್ಲಿ 2017-18ನೇ ಸಾಲಿನಿಂದ 50 ತಾಲ್ಲೂಕುಗಳು ಮತ್ತು 08 ತಾಲ್ಲೂಕುಗಳು ಸೇರಿದಂತೆ ಒಟ್ಟು 58 ತಾಲ್ಲೂಕುಗಳನ್ನು ಸೃಜಿಸಲಾಗಿದೆ. ಹೊಸ ತಾಲ್ಲೂಕುಗಳ ವಿವರವನ್ನು **ಅನುಬಂಧ-1** ರಲ್ಲಿ ನೀಡಿದೆ. ಇನ್ನುಳಿದಂತೆ ಆಡಳಿತಾತ್ಮಕ ಅನುಮೋದನೆ ನೀಡಿರುವ ಹೊಸ ತಾಲ್ಲೂಕುಗಳ ಪೈಕಿ ಇನ್ನೂ 6 ತಾಲ್ಲೂಕುಗಳಿಗೆ ಗ್ರಾಮಗಳನ್ನು ಸೇರ್ಪಡೆ ಮಾಡಿ ಅಧಿಸೂಚನೆ ಹೊರಡಿಸುವ ಪ್ರಕ್ರಿಯೆ ಚಾಲನೆಯಲ್ಲಿದೆ. |
| ಆ) | ಈ ತಾಲ್ಲೂಕುಗಳಲ್ಲಿ, ತಾಲ್ಲೂಕು ಕೇಂದ್ರ ಕಛೇರಿ ಹಾಗೂ ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆಯೇ; (ಒದಗಿಸಿದ್ದಲ್ಲಿ, ಪ್ರತಿಯೊಂದು ತಾಲ್ಲೂಕುಗಳ ವಿವರ ನೀಡುವುದು) | 2017-18ನೇ ಸಾಲಿನಲ್ಲಿ ರಚನೆಯಾದ 50 ನೂತನ ತಾಲ್ಲೂಕುಗಳಲ್ಲಿ ತಹಸೀಲ್ದಾರ್ ಕಚೇರಿ ಹಾಗೂ ತಾಲ್ಲೂಕು ಪಂಚಾಯತಿ ಕಚೇರಿ ಸೇರಿದಂತೆ ಕೆಲವೊಂದು ತಾಲ್ಲೂಕು ಮಟ್ಟದ ಕಚೇರಿಗಳನ್ನು ಪ್ರಾರಂಭಿಸಲಾಗಿದೆ. ನಂತರದಲ್ಲಿ ರಚನೆಯಾದ 8 ತಾಲ್ಲೂಕುಗಳಲ್ಲಿ ಕಂದಾಯ ಇಲಾಖೆ ವತಿಯಿಂದ ತಹಸೀಲ್ದಾರ್ ಕಚೇರಿ ಪ್ರಾರಂಭಿಸಲಾಗುತ್ತಿದೆ. ಹೊಸ ತಾಲ್ಲೂಕುಗಳಲ್ಲಿ ಪ್ರಮುಖ ತಾಲ್ಲೂಕು ಮಟ್ಟದ ಕಚೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ-ಹಂತವಾಗಿ ಪ್ರಾರಂಭಿಸಲು ಎಲ್ಲಾ ಇಲಾಖೆಗಳ ಅಪರ ಮುಖ್ಯ / ಪ್ರಧಾನ ಕಾರ್ಯದರ್ಶಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದೆ. ಮುಂದುವರಿದು, ಹೊಸ ತಾಲ್ಲೂಕುಗಳ ಕಾರ್ಯಾರಂಭ ಮಾಡಲು ಹಾಗೂ ಆಡಳಿತಾತ್ಮಕ ವೆಚ್ಚಗಳನ್ನು ನಿರ್ವಹಿಸಲು ಕಂದಾಯ ಇಲಾಖೆಯಿಂದ ಈ ಕೆಳಕಂಡಂತೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>ಕ್ರಮ ಸಂಖ್ಯೆ / ವರ್ಷ / ಬಿಡುಗಡೆ ಮಾಡಿದ ಅನುದಾನ (ಪ್ರತಿ ತಾಲ್ಲೂಕಿಗೆ)<br>1 / 2017-18 / ರೂ.10.00 ಲಕ್ಷ<br>2 / 2018-19 / ರೂ.10.00 ಲಕ್ಷ<br>3 / 2019-20 / ರೂ.5.00 ಲಕ್ಷ |

<table>
<tr>
<td></td>
<td></td>
<td>
<table>
<tr><td>4</td><td>2020-21</td><td>ರೂ.5.00 ಲಕ್ಷ</td></tr>
<tr><td>5</td><td>2021-22</td><td>ರೂ.1.75 ಲಕ್ಷ (2ನೇ ಕಂತಿನ ಅನುದಾನ ಬಿಡುಗಡೆಗೊಳಿಸಲಾಗುವುದು.</td></tr>
</table>
<br>
ರಾಜ್ಯದಲ್ಲಿ ಹೊಸದಾಗಿ ರಚನೆಯಾದ 50 ತಾಲ್ಲೂಕುಗಳ ಪೈಕಿ ಯಲಹಂಕ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲಾಗಿದ್ದು, ಮೂಡಬಿದರೆ, ಕಡಬ, ಬ್ರಹ್ಮಾವರ, ದಾಂಡೇಲಿ, ಹೆಬ್ರಿ, ಕಾಪು, ಬೈಂದೂರು, ಕೆ.ಜಿ.ಎಫ್, ಕುರುಗೋಡು, ಕಂಪ್ಲಿ, ಬಬಲೇಶ್ವರ, ತಿಕೋಟ ತಾಲ್ಲೂಕುಗಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಪ್ರಸ್ತುತ ಕಟ್ಟಡ ಕಾಮಗಾರಿಗಳು ಪ್ರಗತಿಯಲ್ಲಿವೆ.
<br><br>
ಉಳಿದಂತೆ ಸಾಲಿಗ್ರಾಮ, ಮೂಲ್ಕಿ, ನಿಡಗುಂದಿ, ಕೋಲ್ಹಾರ, ಕಳಸ, ನ್ಯಾಮತಿ, ಗಜೇಂದ್ರಗಡ, ಲಕ್ಷ್ಮೇಶ್ವರ ಮತ್ತು ಹನೂರು ತಾಲ್ಲೂಕುಗಳಲ್ಲಿ ಹೊಸ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಸ್ಥಳ ಗುರುತಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿವೆ.
<br><br>
ಇನ್ನುಳಿದ ತಾಲ್ಲೂಕುಗಳಲ್ಲಿ ಹೊಸದಾಗಿ ಮಿನಿ ವಿಧಾನಸೌಧ ನಿರ್ಮಿಸಲು ಜಾಗ ಗುರುತಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.
</td>
</tr>
<tr>
<td>ಇ)</td>
<td>ಹೊಸದಾಗಿ ಸೃಜಿಸಲಾಗಿರುವ ಎಷ್ಟು ತಾಲ್ಲೂಕುಗಳು ನಂಜುಂಡಪ್ಪ ವರದಿ ಯೋಜನೆಯಲ್ಲಿ ಸೇರ್ಪಡೆಯಾಗಿರುತ್ತದೆ? (ವಿವರ ನೀಡುವುದು)</td>
<td>ರಾಜ್ಯದಲ್ಲಿ ಹೊಸದಾಗಿ ಸೃಜಿಸಲಾಗಿರುವ ತಾಲ್ಲೂಕುಗಳಲ್ಲಿ 39 ತಾಲ್ಲೂಕುಗಳು ನಂಜುಂಡಪ್ಪ ವರದಿಯಲ್ಲಿ ಸೇರ್ಪಡೆಯಾಗಿದ್ದು, ತಾಲ್ಲೂಕುಗಳ ವಿವರವನ್ನು **ಅನುಬಂಧ-2** ರಲ್ಲಿ ನೀಡಿದೆ.</td>
</tr>
</table>

**ಸಂಖ್ಯೆ: ಕಂಇ 120 ಎಲ್‌ಆರ್‌ಡಿ 2021**

(ಆರ್.ಅಶೋಕ)
ಕಂದಾಯ ಸಚಿವರು